**Government Order No.FEE 17 EAA 99, Bangalore, Dated:29th March, 2004**

In the circumstances explained in the preamble, Government are pleased to accord sanction to the following terms and conditions to the Members of the Appellate Authority ie., to Prof. Lahiri and Shri G.S. Tallur.

1. Sitting Allowance --- Rs.1000/-(Rs. One Thousand) Per Sitting subject to a maximum of Rs. 7,500/- (Rs. Seven Thousand Five Hundred only) per Month.
2. The Members of the authority should function under the provisions contained in
   (a) The Karnataka Water Prevention and Control of Pollution (Appellate Authority) Rules, 1976.
   (b) The Environment (Protection) Act 1986 and Notifications there under.
   (c) The Air (Prevention & Control of Pollution) Act 1981 and Rules there under
   (d) The Water (Prevention & Control of Pollution) Act 1974 and Rules there under.

This order issued (regarding Payment of Sitting Allowance) with the concurrence of Finance Department vide Note No. FD 23 Expenditurer-2 2004, dated:11.03.2004.

By Order and in the Name of the Governor of Karnataka,
**V.R. GAIKWAD**
Under Secretary to Government,
Forest, Ecology & Environment Department.

PR-408

**LAW SECRETARIAT**

**Subject:** Appointing Sri V.B. Naik, Public Prosecutor, Principal District and Sessions Judge's Court Mysore to conduct S.C. No:91/2001, on the file of Fast Track Court-IV Mysore.

**Read:** Letter No: DPN/ADM/261/2003-04, Dated:15.03.2004 from the Directarate of Prosecutions, Bangalore.

**Government Order No.LAW 221 LMC 2004, Bangalore, Dated: 30th March, 2004**

Government are pleased to appoint Sri V.B. Naik, Public Prosecutor, attached to the Court of the Principal District and Sessions Judge Mysore, as the Special Public Prosecutor to conduct trial in S.C. No:91/2001 on the file of the Fast Track Court-IV, Mysore with immediate effect.

By Order and in the Name of the Governor of Karnataka,
**S. SRIDHARA**
Asst. Solicitor and Ex-Officio,
I/C-Under Secretary to Government,
Law Department (Lit-II).

PR-409

**ಕಾನೂನು ಸಚಿವಾಲಯ**

**ವಿಷಯ:** ಶ್ರೀ ಪಿ. ಗೋವಿಂದನ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, (ನಿಯೋಜನೆ) ಸಿಬಿಐ ಬೆಂಗಳೂರು, ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ- ಆದೇಶ.

**ಓದಲಾಗಿದೆ :**
1. ಆಡಳಿತಾಧಿಕಾರಿ (ಸಿಬ್ಬಂದಿ) ಸಿ.ಬಿ.ಐ. ನವದೆಹಲಿ ರವರ ಅಧಿಸೂಚನೆ ಸಂಖ್ಯೆ: ಡಿಪಿಎಡಿ 5:2001:263:3: 44:96 ಎಡಿ.ವಿ. ದಿನಾಂಕ:17.01.03.
2. ಶ್ರೀ ಪಿ. ಗೋವಿಂದನ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಬಿಐ. ಎಸಿಬಿ, ಬೆಂಗಳೂರು, ಇವರ ರಾಜೀನಾಮೆ, ದಿನಾಂಕ:08.12.2003.

**ಪ್ರಸ್ತಾವನೆ:**

ಶ್ರೀ ಪಿ. ಗೋವಿಂದನ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರನ್ನು ಬೆಂಗಳೂರಿನ ಸಿಬಿಐ ಕಛೇರಿಗೆ ನಿಯೋಜಿಸಿದ್ದು ದಿನಾಂಕ:26.10.96 ರಿಂದ ಕಾರ್ಯನಿರ್ವಹಿಸುತ್ತಿದ್ದರು.

ಮೇಲೆ ಓದಲಾದ ಕ್ರಮಾಂಕ(1)ರ ಅಧಿಸೂಚನೆಯಲ್ಲಿ ಶ್ರೀ ಪಿ. ಗೋವಿಂದನ್, ಇವರ ಸೇವೆಯನ್ನು ದಿನಾಂಕ:07.08.02ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಸಿ.ಬಿ.ಐ.ನಲ್ಲಿ ವಿಲೀನಗೊಳಿಸಲಾಗಿರುತ್ತದೆ. ಶ್ರೀ ಪಿ. ಗೋವಿಂದನ್ ರವರು ಮೇಲೆ ಓದಲಾದ ಕ್ರಮಾಂಕ(2)ರಲ್ಲಿ ರಾಜೀನಾಮೆ ಪತ್ರ ಸಲ್ಲಿಸಿ ಅಂಗೀಕರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲಾ 234 ಪಿಪಿಇ 02, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2004**

ಶ್ರೀ ಪಿ. ಗೋವಿಂದನ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು (ನಿಯೋಜನೆ) ಸಿಬಿಐ, ಬೆಂಗಳೂರು ಇವರ ಸೇವೆಯನ್ನು ಸಿಬಿಐನಲ್ಲಿ ವಿಲೀನಗೊಳಿಸಿರುವುದರಿಂದ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಅವರು ಸಲ್ಲಿಸಿರುವ ರಾಜೀನಾಮೆಯನ್ನು ಕೆ.ಸಿ.ಎಸ್. ನಿಯಮಾವಳಿ ನಿಯಮ 252(ಎ) ಮತ್ತು (ಬಿ) ಪ್ರಕಾರ ದಿನಾಂಕ:06.08.2002ರ ಅಪರಾಹ್ನ ಜಾರಿಗೆ ಬರುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಹೆಚ್. ನಾಗೇಂದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-2).

ಪಿ.ಆರ್.410

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ನಿಧನ ಹೊಂದಿದ ಕೆ.ಎ.ಎಸ್. ಅಧಿಕಾರಿ, ಶ್ರೀ ಎಸ್. ಸುರೇಶ್ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸಮಾಪ್ತಿಗೊಳಿಸುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಕ್ರಮಾಂಕ:ಸಿಆಸುಇ 112 ಎಸ್‌ಇಎನ್ 2001, ದಿನಾಂಕ:08.09.2003.

2. ಜಿಲ್ಲಾಧಿಕಾರಿ, ತುಮಕೂರು ಅವರ ಪತ್ರ ಸಂಖ್ಯೆ:ಇಎಸ್‌ಟಿ(1) ಸಿಆರ್:96:2003-2004, ದಿನಾಂಕ: 06.10.2003.

**ಪ್ರಸ್ತಾವನೆ:**

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಬೆಂಗಳೂರು, ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಖೋಟಾ ಅಂಕಪಟ್ಟಿ ಹಾಗೂ ನಕಲು ಜಾತಿ ಪ್ರಮಾಣ ಪತ್ರಗಳನ್ನಾಧರಿಸಿ ಪರಿಶಿಷ್ಟ ಜಾತಿ: ಪಂಗಡಗಳಿಗೆ ದೊರಕಬೇಕಾದ ಸೌಲಭ್ಯಗಳನ್ನು ಅನರ್ಹರಿಗೆ ನೀಡುವ ಮೂಲ ದುರ್ನಡತೆ ಎಸಗಿದ ಆರೋಪಕ್ಕಾಗಿ ಇತರ 6 ಮಂದಿಯೊಡನೆ ಶ್ರೀ ಎಸ್. ಸುರೇಶ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೂ ಸಹ ಮೇಲೆ (1)ರಲ್ಲಿ ಓದಲಾದ ದಿನಾಂಕ:08.09.2003ರ ನೋಟೀಸ್ ಜಾರಿ ಮಾಡಿ ಇಲಾಖಾ ವಿಚಾರಣೆ ಹೂಡಲಾಯಿತು. ಜಿಲ್ಲಾಧಿಕಾರಿ ತುಮಕೂರು, ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:06.10.2003ರ ಪತ್ರದಲ್ಲಿ ಶ್ರೀ ಎಸ್. ಸುರೇಶ್, ಅವರು ದಿನಾಂಕ:04.10.2003ರಂದು ತುಮಕೂರು ಬಳಿ ಸಂಭವಿಸಿದ ರಸ್ತೆ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ತಿಳಿಸಿದ್ದಾರೆ. ಆದ್ದರಿಂದ ಶ್ರೀ ಎಸ್. ಸುರೇಶ್ ವಿರುದ್ಧ ವಿಚಾರಣೆಯನ್ನು ಸಮಾಪ್ತಿಗೊಳಿಸಲು ನಿರ್ಧರಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 112 ಎಸ್‌ಇಎನ್ 2001, ಬೆಂಗಳೂರು, ದಿನಾಂಕ:27ನೇ ಮಾರ್ಚ್, 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ದಿವಂಗತ ಶ್ರೀ ಎಸ್. ಸುರೇಶ್, ಕೆ.ಎ.ಎಸ್. ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆಯನ್ನು ಸಮಾಪ್ತಿಗೊಳಿಸುತ್ತದೆ. ಉಳಿದ ಅಧಿಕಾರಿ/ನೌಕರರ ವಿರುದ್ಧ ವಿಚಾರಣೆಯನ್ನು ಮುಂದುವರೆಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).

ಪಿ.ಆರ್.411

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತ ಇವರಿಗೆ ನಿರ್ಜೀವ ಮತ್ತು ಒಣಗಿದ ಬೊಂಬುಗಳನ್ನು ಸರಬರಾಜು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ:ಅಪಜೀ11 ಎಫ್‌ಡಿಪಿ 2004 ದಿನಾಂಕ:16.03.2004.

2. ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಅ.ಸ.ಪತ್ರ ಸಂಖ್ಯೆ:ಎಂಪಿಎಂ/ಎಂಡಿ/2004 ದಿನಾಂಕ:16.03.2004.

**ಪ್ರಸ್ತಾವನೆ:**

ಕ್ರಮಸಂಖ್ಯೆ (1)ರ ಆದೇಶದಲ್ಲಿ ಮೆ:ಮೈಸೂರು ಕಾಗದ ಕಾರ್ಖಾನೆ ನಿಯಮಿತ, ಭದ್ರಾವತಿ ಇವರಿಗೆ ಕೊಪ್ಪ ವಿಭಾಗದಿಂದ ಸುಮಾರು 25,000 ಮೆ.ಟನ್‌ನಷ್ಟು ಒಣಗಿದ ಹಾಗೂ ಹೂಬಿಟ್ಟ ಬೊಂಬುಗಳನ್ನು ಕಡಿತಲೆ ದರ ಟನ್ ಒಂದಕ್ಕೆ ರೂ.500/-(ರೂಪಾಯಿ ಐದು ನೂರು ಮಾತ್ರ)ರಂತೆ ಸರಬರಾಜು ಮಾಡಲು ಸರ್ಕಾರ ಮಂಜೂರಾತಿ ನೀಡಿದೆ.

ಕ್ರಮ ಸಂಖ್ಯೆ(2)ರಲ್ಲಿನ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಮೆ:ಮೈಸೂರು ಕಾಗದ ಕಾರ್ಖಾನೆ ನಿಯಮಿತ ಇವರು ಚಿಕ್ಕಮಗಳೂರು ವಿಭಾಗದಲ್ಲಿ ಕಾಡ್ಗಿಚ್ಚು ಹಬ್ಬಿದ್ದು ಚಿಕ್ಕಮಗಳೂರು ಜಿಲ್ಲೆಯ ಮುತ್ತೋಡಿ ಮತ್ತು ಭದ್ರಾವತಿ ವಿಭಾಗದಿಂದ ಸರಬರಾಜು ಮಾಡಬೇಕಾದ ಬೊಂಬುಗಳನ್ನು ಕಡಿತಲೆ ಮಾಡಲು ಅರಣ್ಯ ಗುತ್ತಿಗೆದಾರರಿಂದ ಕೊಟೇಶನ್‌ಗಳನ್ನು ಕರೆದಿದ್ದು, ಗುತ್ತಿಗೆದಾರರು ಮೆಟ್ರಿಕ್ ಟನ್ ಒಂದಕ್ಕೆ ರೂ.1500/-ನಿಗದಿ ಮಾಡಲು ಕೋರಿರುತ್ತಾರೆ. ನಂತರ ಚರ್ಚಿಸಿ ರೂ.1300/-ಗಳನ್ನು ಕಡಿತಲೆ, ಹಾಗೂ ರೂ.500/-ಗಳನ್ನು ಸರ್ಕಾರಕ್ಕೆ ಪಾವತಿಸಬೇಕಾಗಿರುವ ಹಿನ್ನೆಲೆಯಲ್ಲಿ, ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತವು ರೂ.1400/-ಕ್ಕಿಂತ ಅಧಿಕವಾಗಿ ಪಾವತಿಸಿದರೆ ಈಗಲೇ ಆರ್ಥಿಕ ನಷ್ಟ ಹೊಂದಿರುವ ಕಾಗದ ಕಾರ್ಖಾನೆಗೆ ಆರ್ಥಿಕವಾಗಿ ತುಂಬಾ ನಷ್ಟವಾಗುವ ಸಂಭವವಿರುವ ಹಿನ್ನೆಲೆಯಲ್ಲಿ, ಸರ್ಕಾರಕ್ಕೆ ಪಾವತಿಸುವ ರೂ.500/-ಗಳನ್ನು ಕಡಿಮೆಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಮೆ:ಮೈಸೂರು ಕಾಗದ ಕಾರ್ಖಾನೆ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004, ಬೆಂಗಳೂರು, ದಿನಾಂಕ: 30ನೇ ಮಾರ್ಚ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಇದೊಂದು ಬಾರಿಗೆ ಮಾತ್ರ ವಿಶೇಷ ಪ್ರಕರಣವೆಂದು ಪರಿಗಣಿಸಿ, ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ಚಿಕ್ಕಮಗಳೂರು ಜಿಲ್ಲೆಯ ಮುತ್ತೋಡಿ ಮತ್ತು ಭದ್ರಾವತಿ ವಿಭಾಗಗಳಿಂದ ಸರಬರಾಜು ಮಾಡುವ ನಿರ್ಜೀವ ಮತ್ತು ಒಣ ಬೊಂಬುಗಳಿಗೆ ಪ್ರತಿ ಮೆಟ್ರಿಕ್ ಟನ್‌ಗೆ ಹಾಲಿ ಇರುವ ಕಡಿತಲೆ ದರ ರೂ.500/-ಗಳಿಗೆ(ರೂಪಾಯಿ ಐದು ನೂರು ಮಾತ್ರ) ಬದಲಾಗಿ ರೂ.150/-(ರೂಪಾಯಿ ಒಂದು ನೂರ ಐವತ್ತು ಮಾತ್ರ) ಗಳಿಗೆ ಸರಬರಾಜು ಮಾಡಲು ಸರ್ಕಾರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 287 ವೆ-2/04 ದಿನಾಂಕ:29.03.2004ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್.412

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ:** ಬೆಂಗಳೂರಿನ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ:ಲಾ 66 ಎಲ್ಎಸಿ 2003 ದಿನಾಂಕ:19.03.2003.

2. ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರ ಪತ್ರ ಸಂಖ್ಯೆ:ಜಿಒಬಿ-2, 282(24)(1) 2002 ದಿನಾಂಕ:04.02.2003.

**ಪ್ರಸ್ತಾವನೆ:**

ಬೆಂಗಳೂರಿನ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮೇಲೆ (1)ರ ದಿನಾಂಕ:19.03.2003ರ ಸರ್ಕಾರಿ ಆದೇಶದಲ್ಲಿ ಮುಂದುವರೆಸಲು ಮಂಜೂರಾತಿಯನ್ನು ನೀಡಲಾಗಿದ್ದು, ಅವುಗಳ ಕಾಲಾವಧಿಯು ದಿನಾಂಕ:31.03.2004ಕ್ಕೆ ಪೂರ್ಣಗೊಳ್ಳಲಿವೆ:

1. 21ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.
2. 22ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.
3. 23ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.
4. 24 ರಿಂದ 31ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯಗಳು, ಬೆಂಗಳೂರು.
5. 33ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.

ಸದರಿ ನ್ಯಾಯಾಲಯಗಳಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ ಹಾಗೂ ಕ್ರಮವಾಗಿ 13,12,9,5 ಮತ್ತು 5 ವರ್ಷಗಳಿಗೂ ಹೆಚ್ಚುಕಾಲ ಅಸ್ತಿತ್ವದಲ್ಲಿರುವುದರಿಂದ, ಸದರಿ ನ್ಯಾಯಾಲಯಗಳನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:01.04.2003 ರಿಂದ ಖಾಯಂಗೊಳಿಸಲು ಮೇಲೆ ಓದಲಾದ (2)ರ ದಿನಾಂಕ:04.02.2003ರ ಪತ್ರದಲ್ಲಿ ಕೋರಲಾಗಿದ್ದು, ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಪುನರ್ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 26 ಎಲ್ಎಸಿ 2004, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2004**

ಬೆಂಗಳೂರಿನ ಈ ಕೆಳಕಂಡ ನ್ಯಾಯಾಲಯಗಳಿಗೆ ಸೃಜಿಸಲಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳು ಹಾಗೂ ಪ್ರಾಸಿಕ್ಯೂಷನ್ ವಿಭಾಗದ ಸರ್ಕಾರಿ ಅಭಿಯೋಜಕರು ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ನ್ಯಾಯಾಲಯಗಳ ಕಾರ್ಯಾವಧಿಯನ್ನು ದಿನಾಂಕ:01.04.2004ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿ ಮಂಜೂರಾತಿ ನೀಡಿದೆ:

1) 21ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.
2) 22ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.
3) 23ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.
4) 24 ರಿಂದ 31ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯಗಳು, ಬೆಂಗಳೂರು.
5) 33ನೇ ಹೆಚ್ಚುವರಿ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೆಂಗಳೂರು.

ಮೇಲೆ ತಿಳಿಸಿದ ಕ್ರಮಸಂಖ್ಯೆ (5)ರ ನ್ಯಾಯಾಲಯದ ಅಂದರೆ, ಎನ್.ಡಿ.ಪಿ.ಎಸ್. ಅಧಿನಿಯಮದಡಿಯಲ್ಲಿ ಸೃಜಿಸಲಾದ ವಿಶೇಷ ನ್ಯಾಯಾಲಯದ ಪ್ರಾಸಿಕ್ಯೂಷನ್ ವಿಭಾಗಕ್ಕೆ ಮಂಜೂರಾದ ಪಬ್ಲಿಕ್ ಪ್ರಾಸಿಕ್ಯೂಟರ್ ಮತ್ತು ಹೊಂದಿಕೊಂಡ ಇತರೆ ಹುದ್ದೆಗಳನ್ನು ದಿನಾಂಕ:01.04.2001ರಿಂದ 31.03.2005ರ ವರೆಗೆ ಮುಂದುವರೆಸಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01" ಯೋಜನೇತರ ಇದರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್.413

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕಾನೂನು ಇಲಾಖೆ (ಆಡಳಿತ-1).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** 2003-2004ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ಚಿಕ್ಕಮಗಳೂರು ಜಿಲ್ಲೆಗೆ ಬಿಡುಗಡೆ ಮಾಡುವ (ಶೇ.25ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ :** 1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:ಆರ್ 17014:10:2003 ಎಸ್‌ಜಿಎಸ್‌ವೈ (ಡಿಆಡ್‌ಮಿನ್) (ಎಸ್‌ಆರ್ ನಂ.24) ದಿನಾಂಕ:13.06.2003, (ಎಸ್‌ಆರ್ ನಂ.106) ದಿನಾಂಕ:16.01.2004, (ಎಸ್‌ಆರ್ ನಂ.121) ದಿನಾಂಕ:27.01.2004. (ಎಸ್‌ಆರ್. ನಂ. 136) ದಿನಾಂಕ:05.02.2004, (ಎಸ್‌ಆರ್ ನಂ.157) ದಿನಾಂಕ:24.02.2004 ಮತ್ತು (ಎಸ್‌ಆರ್ ನಂ.178) ದಿನಾಂಕ:10.03.04.

2. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 7 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ: 08.09.2003, 21.02.2004, 15.03.2004 ಮತ್ತು ದಿನಾಂಕ:26.03.2004.

3. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:ಆರ್ 17014:10:2003 ಎಸ್‌ಜಿಎಸ್‌ವೈ 1 (ಡಿಆಡ್‌ಮಿನ್) (ಎಸ್‌ಆರ್ ನಂ.203) ದಿನಾಂಕ:19.03.04.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2003-04ನೇ ಸಾಲಿಗೆ ಒಂದನೇ ಕಂತಿನ ಹಣ ರೂ. 481.62 ಲಕ್ಷ ಮತ್ತು ರೂ.160.54 ಲಕ್ಷ ಅನುಕ್ರಮವಾಗಿ ಬಿಡುಗಡೆ ಮಾಡಿವೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು 26 ಜಿಲ್ಲೆಗಳಿಗೆ ಎರಡನೇ ಕಂತಿನ ಹಣ ರೂ.425.56 ಹಾಗೂ ರೂ.141.85 ಲಕ್ಷ ಅನುಕ್ರಮವಾಗಿ ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರ ಉಲ್ಲೇಖ(3)ರಲ್ಲಿ ಚಿಕ್ಕಮಗಳೂರು ಜಿಲ್ಲೆಗೆ ರೂ.8.52 ಲಕ್ಷ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯವು ರೂ.2.84 ಲಕ್ಷ ಬಿಡುಗಡೆ ಮಾಡುತ್ತಿದೆ. ಆದ್ದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 7 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2004**

ರಾಜ್ಯ ಸರ್ಕಾರವು ಚಿಕ್ಕಮಗಳೂರು ಜಿಲ್ಲಾ ಪಂಚಾಯತ್‌ಗೆ ಎರಡನೇ ಕಂತಿನ ಹಣ ರೂ.2.84 ಲಕ್ಷವನ್ನು (ರೂ. ಎರಡು ಲಕ್ಷದ ಎಂಬತ್ತನಾಲ್ಕು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತ್ ಹೆಸರು | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಎರಡನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಎರಡನೇ ಕಂತು |
|---|---|---|---|
| 1. | ಚಿಕ್ಕಮಗಳೂರು | 8.52 | 2.84 |
| | **ಒಟ್ಟು** | **8.52** | **2.84** |

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ಆಡಳಿತ ನಿರ್ವಹಣೆಗಾಗಿ ಉಪಯೋಗಿಸುವುದು.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-201-ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. (2515-00-196-1-06-201)

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

ಮುಖ್ಯ ಲೆಕ್ಕಾಧಿಕಾರಿಗಳು ಚಿಕ್ಕಮಗಳೂರು ಜಿಲ್ಲಾ ಪಂಚಾಯತ್‌ರವರಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2003-2004ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯಲೆಕ್ಕಾಧಿಕಾರಿಗಳು ಚಿಕ್ಕಮಗಳೂರು ಜಿಲ್ಲಾ ಪಂಚಾಯತ್‌ರವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನೆ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು. ರಾಜ್ಯದ ಉಸ್ತುವಾರಿ ಕೋಶಗಳಾದ ಸ್ವಉದ್ಯೋಗ ಕಾರ್ಯಕ್ರಮ ಹಾಗೂ ಪ್ರದೇಶಾಭಿವೃದ್ಧಿ ಕಾರ್ಯಕ್ರಮ ಶಾಖೆಗಳು ಹಣ ಉಪಯುಕ್ತತಾ ಪತ್ರವನ್ನು ನಿರ್ದೇಶಕರು (ಸ್ವಉಕಾ) ರವರಿಗೆ ನೀಡುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 125 ಪಿಬಿಎಸ್ 2004 ದಿನಾಂಕ:29.03.2004 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.134/03 ದಿನಾಂಕ:29.03.2004 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ್**

ಪಿ.ಆರ್.414

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ವಿಷಯ:** 2003-2004ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಶೀರ್ಷಿಕೆಯಡಿ ಡಿಆರ್‌ಡಿಎ ಕಛೇರಿ ಕಟ್ಟಡ ಕಟ್ಟಲು ರಾಜ್ಯದ ಪಾಲಿನ ಒಂದನೇ ಕಂತಿನ ಹಣ ಬಿಡುಗಡೆ ಬಗ್ಗೆ.

**ಉಲ್ಲೇಖ :** 1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್ 20015.71.2002 ಎಸ್‌ಜಿಎಸ್‌ವೈ 1 ದಿನಾಂಕ:06.03.2003.
2. ಸರ್ಕಾರದ ಪತ್ರದ ಸಮಸಂಖ್ಯೆ ದಿನಾಂಕ:28.03.2003 ಮತ್ತು 09.06.2003.
3. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ:ಆರ್ 20015.65.2002-ಎಸ್‌ಜಿಎಸ್‌ವೈ 1 (ಡಿಅಡ್‌ಮಿನ್) (ಎಸ್‌ಆರ್ ನಂ.206) ದಿನಾಂಕ:22.04.04.

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ಉಲ್ಲೇಖ (1)ರ ಪತ್ರದಲ್ಲಿ ಸರ್ಕಾರಿ ಕಟ್ಟಡಗಳಿಲ್ಲದ ಡಿಆರ್‌ಡಿಎಗಳ ಹಾಗೂ ಕಟ್ಟಡ ನಿರ್ಮಾಣಕ್ಕೆ ಅನುದಾನದ ಅಗತ್ಯವಿರುವ ಜಿಲ್ಲೆಗಳ ಬಗ್ಗೆ ಮಾಹಿತಿಯನ್ನು ವಿವರವಾದ ಅಂದಾಜುಪಟ್ಟಿಯೊಂದಿಗೆ ಕಳುಹಿಸುವಂತೆ ಕೋರಲಾಗಿತ್ತು. ಇದರನ್ವಯ ಉಲ್ಲೇಖ (2)ರಂತೆ ರಾಜ್ಯ ಸರ್ಕಾರವು ದಿನಾಂಕ:28.03.2003ರಲ್ಲಿ 12 ಜಿಲ್ಲಾ ಪಂಚಾಯತ್‌ಗಳಿಗೆ ರೂ.2056.37 ಲಕ್ಷ ಹಾಗೂ ದಿನಾಂಕ:09.06.2003ರಲ್ಲಿ 7 ಜಿಲ್ಲಾ ಪಂಚಾಯತ್‌ಗಳಿಗೆ ರೂ.1363.00 ಲಕ್ಷ ಒದಗಿಸುವಂತೆ ಕೋರಿತ್ತು.

ಉಲ್ಲೇಖ (3)ರಂತೆ ದಿನಾಂಕ:09.06.2003ರಲ್ಲಿ 7 ಜಿಲ್ಲೆಗಳಿಗೆ ರೂ.1363.00 ಲಕ್ಷ ಕೋರಿದ್ದು, ಈಗ ಕೇಂದ್ರ ಸರ್ಕಾರವು ರೂ.165.00 ಲಕ್ಷ ಮಂಜೂರು ಮಾಡಿದೆ. ಇದರಲ್ಲಿ ಕೇಂದ್ರದ ಪಾಲು ರೂ.123.75 ಲಕ್ಷವೆಂದು ತಿಳಿಸಿ 1ನೇ ಕಂತಿನ ಹಣ ರೂ.61.87 ಲಕ್ಷ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಹಣ ರೂ.20.62 ಲಕ್ಷ ಬಿಡುಗಡೆ ಮಾಡಬೇಕಾಗಿದೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ:30ನೇ ಮಾರ್ಚ್, 2004**

ರಾಜ್ಯ ಸರ್ಕಾರವು ಕೆಳಕಂಡ ಜಿಲ್ಲಾ ಪಂಚಾಯತ್‌ಗಳಿಗೆ ಕಟ್ಟಡ ಕಟ್ಟುವ ಸಲುವಾಗಿ ರೂ. 20.62 ಲಕ್ಷವನ್ನು (ರೂ. ಇಪ್ಪತ್ತು ಲಕ್ಷದ ಅರವತ್ತೆರಡು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತ್ ಹೆಸರು | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಅನುದಾನ | ಕೇಂದ್ರದ ಪಾಲಿನ ಅನುದಾನ ಒಟ್ಟು ಅನುದಾನ | ಕೇಂದ್ರದ ಪಾಲಿನ 1ನೇ ಕಂತಿನ ಅನುದಾನ ಬಿಡುಗಡೆ ಮಾಡಿರುವುದು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ 1ನೇ ಕಂತಿನ ಅನುದಾನ |
|---|---|---|---|---|---|
| 1. | ಬೀದರ್ | 21.00 | 15.75 | 7.87 | 2.62 |
| 2. | ದಾವಣಗೆರೆ | 24.00 | 18.00 | 9.00 | 3.00 |
| 3. | ಗದಗ್ | 21.00 | 15.75 | 7.87 | 2.62 |
| 4. | ಗುಲಬರ್ಗಾ | 24.00 | 18.00 | 9.00 | 3.00 |
| 5. | ಕೋಲಾರ | 27.00 | 20.25 | 10.13 | 3.38 |
| 6. | ರಾಯಚೂರು | 21.00 | 15.75 | 7.88 | 2.63 |
| 7. | ಉತ್ತರಕನ್ನಡ | 27.00 | 20.25 | 10.12 | 3.37 |
| | **ಒಟ್ಟು** | **165.00** | **123.75** | **61.87** | **20.62** |

**ಷರತ್ತುಗಳು:**

1) ಕಛೇರಿ ಕಟ್ಟಡ ಕಟ್ಟಲು ನೀಡಿರುವ ಹಣವನ್ನು ಇದಕ್ಕಾಗಿಯೇ ವಿನಿಯೋಗಿಸುವುದು ಬೇರೆ ಇನ್ನಾವುದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದಲ್ಲ.

2) ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

3) ಈ ವೆಚ್ಚವನ್ನು ಡಿಆರ್‌ಡಿಎ ಆಡಳಿತ ಯೋಜನೆಯ ಲೆಕ್ಕಶೀರ್ಷಿಕೆಯಿಂದ ಭರಿಸತಕ್ಕದ್ದು.
ಪ್ರಧಾನ ಲೆಕ್ಕಶೀರ್ಷಿಕೆ 2515-ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1 ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-201 ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. (2515-00-196-1-06-201)

4) ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

5) ಜಿಲ್ಲಾಪಂಚಾಯತ್‌ಗಳು ಹಣದ ಶೇಕಡ 60ರಷ್ಟು ಖರ್ಚುಮಾಡಿ ಹಾಗೂ ಭೌತಿಕ ಮತ್ತು ಆರ್ಥಿಕ ಗುರಿ ಸಾಧಿಸಿದ ನಂತರವೇ 2ನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಲಾಗುವುದು.

6) ಜಿಲ್ಲಾ ಪಂಚಾಯತ್‌ಗಳು ಕಛೇರಿ ಕಟ್ಟಡ ಕಟ್ಟಲು ನಿಖರ ಕಾಲಾವಧಿಯನ್ನು ನಿಗದಿಪಡಿಸಿ ಸರ್ಕಾರಕ್ಕೆ ತಿಳಿಸುವುದು.

7) 2ನೇ ಕಂತಿನ ಪ್ರಸ್ತಾವನೆಯೊಂದಿಗೆ ಲೆಕ್ಕಪರಿಶೋಧಕರ ವರದಿ ಮತ್ತು ಹಣಬಳಕೆ ಪ್ರಮಾಣ ಪತ್ರ ಸಲ್ಲಿಸುವುದು.

8) ಮುಖ್ಯ ಲೆಕ್ಕಾಧಿಕಾರಿಗಳು, ಬೀದರ್, ದಾವಣಗೆರೆ, ಗದಗ್, ಗುಲಬರ್ಗಾ, ಕೋಲಾರ, ರಾಯಚೂರು ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತ್‌ರವರಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 126 ಪಿಬಿಎಸ್ 2004 ದಿನಾಂಕ:30.03.2004 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.135/03 ದಿನಾಂಕ:30.03.2004 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ್**

ಪಿ.ಆರ್.415 ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** 2003-2004ನೇ ಸಾಲಿನಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್‌ನ ಸಹಯೋಗದೊಂದಿಗೆ ರಾಜ್ಯ ಸಂರಕ್ಷಿತ ಸ್ಮಾರಕಗಳ ನಿರ್ವಹಣೆ ಮತ್ತು ಅಭಿವೃದ್ಧಿ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ:ಸಂಕಇ 123 ಕೆಎಂಯು 2003 ದಿನಾಂಕ:01.03.2004.

2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ:1:2003-04 ದಿನಾಂಕ: 04.03.2004.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಸಹಭಾಗಿತ್ವದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ವತಿಯಿಂದ ರಾಜ್ಯದಲ್ಲಿನ ಸಂರಕ್ಷಿತ ಸ್ಮಾರಕಗಳ ಕಾಮಗಾರಿಗಳನ್ನು 2003-04ನೇ ಸಾಲಿನಲ್ಲಿ ಕೈಗೆತ್ತಿಕೊಳ್ಳಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್‌ರವರು ಕಳೆದ ಸಾಲಿನ ಅಂದರೆ, 2002-03ನೇ ಸಾಲಿನ ಕ್ರಿಯಾ ಯೋಜನೆಯನ್ವಯ ತೆಗೆದುಕೊಂಡಿರುವ ಸ್ಮಾರಕಗಳ ಸಂರಕ್ಷಣಾ ಕಾಮಗಾರಿಗಳಿಗೆ ಅನುಪಾಲನಾ ವರದಿಯನ್ನು ಸಲ್ಲಿಸುತ್ತಾ ಪ್ರಸಕ್ತ ಸಾಲಿನ ಅಂದರೆ 2003-04ನೇ ಸಾಲಿನಲ್ಲಿ ತೆಗೆದುಕೊಳ್ಳಲಾಗುತ್ತಿರುವ ಸ್ಮಾರಕಗಳ ಸಂರಕ್ಷಣಾ ಕಾಮಗಾರಿಗಳಿಗೆ ರೂ.40.00 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2205-00-103-0-02 (ಯೋಜನೇತರ) 059-ಇತರೆ ಖರ್ಚು ರಡಿಯಲ್ಲಿ ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 123 ಕೆಎಂಯು 2003, ಬೆಂಗಳೂರು, ದಿನಾಂಕ:12ನೇ ಮಾರ್ಚ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2003-04ನೇ ಸಾಲಿನಲ್ಲಿ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ಸಹಯೋಗದೊಂದಿಗೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ವತಿಯಿಂದ ಸರ್ಕಾರದ ಆದೇಶ ಸಂಖ್ಯೆ:ಸಂಕಇ 123 ಕೆಎಂಯು 2003 ದಿನಾಂಕ 01.03.2004ರಲ್ಲಿ ಆದೇಶಿಸಲಾದ ಸ್ಮಾರಕಗಳ ಸಂರಕ್ಷಣಾ ಕಾಮಗಾರಿಗಳಿಗೆ ರೂ.40.00 ಲಕ್ಷಗಳನ್ನು (ನಲವತ್ತು ಲಕ್ಷ ರೂಪಾಯಿಗಳು ಮಾತ್ರ) ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರಿಗೆ ಮಂಜೂರಾತಿ ನೀಡಿ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-103-0-02 (ಯೋಜನೇತರ) 059-ಇತರ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1837 ವೆಚ್ಚ-5/03 ದಿನಾಂಕ:08.12.2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹಾಗೂ ಅಧಿಸೂಚನೆ ಸಂಖ್ಯೆ:ಪಿಡಬ್ಲ್ಯೂಡಿ 654 ಎಫ್‌ಸಿ- 3/2003 ದಿನಾಂಕ:29.11.2003 ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರಡಿಯಲ್ಲಿ ನೀಡಿದ ವಿನಾಯಿತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್.416 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಕರ್ನಾಟಕ ಪುರಾತತ್ವ ಸಂಶೋಧಕರಿಗೆ ಪ್ರೋತ್ಸಾಹ ಧನ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ:ಸಂಕಇ 14 ಕೆಎಂಯು 2003 ದಿನಾಂಕ:23.09.2003.

2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ: ಡಿಎಎಂ/ಇಎಸ್‌ಟಿ:3:2003-04 ದಿನಾಂಕ:06.01.2004.

**ಪ್ರಸ್ತಾವನೆ:**

ಕರ್ನಾಟಕ ಪುರಾತತ್ವ ಸಂಶೋಧನೆ ಕೈಗೊಂಡು ಕರ್ನಾಟಕ ಸರ್ಕಾರದ ಅಂಗೀಕೃತ ವಿಶ್ವವಿದ್ಯಾನಿಲಯಗಳಿಂದ ಪಿ.ಹೆಚ್‌ಡಿ ಅಥವಾ ಡಿ.ಲಿಟ್ ಪದವಿ ಪಡೆದುಕೊಂಡ ಸಂಶೋಧಕರಿಗೆ ಪ್ರೋತ್ಸಾಹದ ರೂಪದಲ್ಲಿ ರೂ.10,000/- (ರೂಪಾಯಿ ಹತ್ತು ಸಾವಿರಗಳು ಮಾತ್ರ) ನೀಡಲು ಮೇಲೆ ಓದಲಾದ ಕ್ರಮ ಸಂಖ್ಯೆ:-1ರ ಆದೇಶದಲ್ಲಿ ಕೆಲವು ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಸರ್ಕಾರ ಅನುಮತಿ ನೀಡಲಾಗಿದೆ.

ಕ್ರಮ ಸಂಖ್ಯೆ(2)ರ ಪತ್ರದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ನಿರ್ದೇಶಕರು ಈ ಕಾರ್ಯಕ್ರಮಕ್ಕೆ ದಿನಾಂಕ:23.09.2003ರಂದು ಆದೇಶ ನೀಡಿದ್ದರಿಂದ, 2003-04ನೇ ಸಾಲಿನ ಕ್ರಿಯಾಯೋಜನೆಯಡಿಯಲ್ಲಿ ಈ ಕಾರ್ಯಕ್ರಮಕ್ಕೆ ಅನುದಾನದ ಅವಕಾಶವನ್ನು ಕಲ್ಪಿಸಲು ಆಗಲಿಲ್ಲ. ಆದಾಗ್ಯೂ ಪ್ರಸಕ್ತ ಸಾಲಿನಲ್ಲಿ ಪ್ರೋತ್ಸಾಹಧನವನ್ನು ಇಬ್ಬರು ಅಥವಾ ಮೂವರಿಗೆ ಮಾತ್ರ ನೀಡಬಹುದೆಂದು ಹಾಗೂ ಈ ಬಾಬಿಗೆ ರೂ.30.000/- ಸಾವಿರಗಳನ್ನು ಗರಿಷ್ಟ ಮೊತ್ತವೆಂದು ನಿಗದಿಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 147 ಕೆಎಂಯು 2003, ಬೆಂಗಳೂರು, ದಿನಾಂಕ:16ನೇ ಮಾರ್ಚ್, 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಪುರಾತತ್ವದಲ್ಲಿ ಸಂಶೋಧನೆ ಕೈಗೊಂಡು, ಕರ್ನಾಟಕ ಸರ್ಕಾರದ ಅಂಗೀಕೃತ ವಿಶ್ವವಿದ್ಯಾನಿಲಯಗಳಿಂದ ಪಿ.ಎಚ್.ಡಿ. ಅಥವಾ ಡಿ.ಲಿಟ್ ಪದವಿ ಪಡೆದುಕೊಂಡ ಸಂಶೋಧಕರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ರೂ.10,000/-ಗಳನ್ನು ಪ್ರೋತ್ಸಾಹಧನವಾಗಿ ಪ್ರಸಕ್ತ ಸಾಲಿಗೆ ಮೂವರು ಸಂಶೋಧಕರಿಗೆ ಮಾತ್ರ ನೀಡುವಂತೆ ಹಾಗೂ ಈ ಬಾಬಿಗೆ ಗರಿಷ್ಟ ಮೊತ್ತ 30,000/-ಗಳನ್ನು ನಿಗದಿಪಡಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

**ಷರತ್ತುಗಳು:**

1. ಕರ್ನಾಟಕ ಪುರಾತತ್ವ ಅಂದರೆ ಕರ್ನಾಟಕದ ಪ್ರಾಗೈತಿಹಾಸಿಕ ಪುರಾತತ್ವ, ಐತಿಹಾಸಿಕ ಪುರಾತತ್ವ, ಪ್ರಾಚೀನ ಕಲೆ ಮತ್ತು ವಾಸ್ತು ಶಿಲ್ಪ, ಪ್ರಾಚೀನ ಶಾಸನಶಾಸ್ತ್ರ, ಪ್ರಾಚೀನ ನಾಣ್ಯ ಶಾಸ್ತ್ರದಲ್ಲಿ ಅಥವಾ ಕರ್ನಾಟಕ ಪ್ರಾಚ್ಯವಸ್ತು ಸಂಗ್ರಹಾಲಯಗಳ ಕುರಿತು ಸಂಶೋಧನೆ ಕೈಗೊಂಡು ಕರ್ನಾಟಕ ಸರ್ಕಾರದ ಅಂಗೀಕೃತ ವಿಶ್ವವಿದ್ಯಾನಿಲಯಗಳಿಂದ ಪಿ.ಹೆಚ್.ಡಿ. ಅಥವಾ ಡಿ.ಲಿಟ್ ಪದವಿ ಪಡೆದುಕೊಂಡಿರತಕ್ಕದ್ದು.
2. ಸಂಶೋಧಕರು ಕೈಗೊಂಡ ಸಂಶೋಧನೆ ಮೂಲ ಸಂಶೋಧನೆಯಾಗಿರತಕ್ಕದ್ದು, ಮತ್ತು ಈ ಕುರಿತು ವಿಶ್ವವಿದ್ಯಾನಿಲಯದಿಂದ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.
3. ಪಿ.ಹೆಚ್.ಡಿ. ಅಥವಾ ಡಿ.ಲಿಟ್ ಪದವಿ ಪಡೆದ ಕುರಿತು ಅಧಿಸೂಚನೆ ಪ್ರಮಾಣ ಪತ್ರ ಮತ್ತು ಪದವಿ ಪಡೆದುಕೊಳ್ಳಲು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾ ಪ್ರಬಂಧದ ಪ್ರತಿಯನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಗೆ ಸಲ್ಲಿಸುವುದು.
4. ಪ್ರೋತ್ಸಾಹ ಧನದ ಮೊತ್ತ ರೂ.10.000/-(ರೂಪಾಯಿ ಹತ್ತು ಸಾವಿರ ಮಾತ್ರ)ವಾಗಿರತಕ್ಕದ್ದು.
5. ಒಬ್ಬ ಸಂಶೋಧಕರಿಗೆ ಒಮ್ಮೆ ಮಾತ್ರ ಪ್ರೋತ್ಸಾಹಧನ ಪಡೆದುಕೊಳ್ಳಲು ಅರ್ಹರು.
6. ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ ನಿರ್ದೇಶಕರು, ಸಂಶೋಧಕರು ಸಲ್ಲಿಸಿದ ಮಹಾ ಪ್ರಬಂಧದ ಪ್ರತಿಯನ್ನು ಇಲಾಖೆಯ ಗ್ರಂಥಾಲಯದಲ್ಲಿ ಕಾಯ್ದಿರಿಸತಕ್ಕದ್ದು.
7. ಈ ಯೋಜನೆ 2003-04ನೇ ಸಾಲಿನಿಂದ ಜಾರಿಗೆ ಬರತಕ್ಕದ್ದು.
8. ಮೆರಿಟ್ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವುದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-02-(ಯೋಜನೆ) ಉಪಶೀರ್ಷಿಕೆ-059 ಇತರ ಖರ್ಚು ಅಡಿಯಲ್ಲಿ ರೂ.34.37 ಲಕ್ಷಗಳನ್ನು ನಿಗದಿಪಡಿಸಿದ್ದು, ಇದರ ಉಳಿತಾಯದಿಂದ ಸಂಭವಿಸುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ:12.03.2004ರ ಟಿಪ್ಪಣಿ ಸಂಖ್ಯೆ:ಇಡಿ 152 ಐಎಫ್ (ಬಿಎ) 2004 ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್.417 ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಜಲಸಂಪನ್ಮೂಲ ಯೋಜನೆ ಮತ್ತು ನಿರ್ವಹಣೆಯ ಕಾರ್ಯಾಗಾರಕ್ಕೆ ಅಧಿಕಾರಿಗಳನ್ನು ನಿಯೋಜಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆರವರೊಂದಿಗೆ ಅಂತ್ಯಗೊಂಡಿರುವ ಪತ್ರ ವ್ಯವಹಾರದ ಪತ್ರ ಸಂಖ್ಯೆ:ಗಭೂಇ/ವಿನಿ(ಯೋ)/ತರಬೇತಿ/2003-04/2971, ದಿನಾಂಕ:03.02.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರು, ಜಲಸಂಪನ್ಮೂಲ ಯೋಜನೆ ಮತ್ತು ನಿರ್ವಹಣೆಯ ಬಗ್ಗೆ ದಾವಣಗೆರೆಯ ಬಾಪೂಜಿ ಇನ್ಸ್‌ಟಿಟ್ಯೂಟ್ ಆಫ್ ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿ ಇವರು ದಿನಾಂಕ:12.12.2003 ಮತ್ತು 13.12.2003ರಂದು ಏರ್ಪಡಿಸಿದ್ದ ಕಾರ್ಯಾಗಾರವು ಭೌಗೋಳಿಕ ದೂರಸಂವೇದನಾ ಹಾಗೂ ಸಮಸ್ತ ವಿಶ್ವದ ಸ್ಥಿತಿಯ ಮತ್ತು ಈಗಿನ ಅಂತರ್ಜಲ ಸಂಪನ್ಮೂಲ ತಾಂತ್ರಿಕ ಮಾದರಿಗಳನ್ನು ಅಳವಡಿಸಿ ಮಾಹಿತಿ ಪಡೆಯುವ ವಿಷಯಕ್ಕೆ ಸಂಬಂಧಿಸಿದ್ದು, ಇದು ಅತೀ ಮುಖ್ಯವಾಗಿರುವುದರಿಂದ ಈ ಕಾರ್ಯಾಗಾರಕ್ಕೆ ಇಲಾಖೆವತಿಯಿಂದ 10 ಅಧಿಕಾರಿಗಳನ್ನು ನಿಯೋಜಿಸಲಾಗಿದ್ದು, ಪ್ರತಿ ಅಧಿಕಾರಿಗೆ ರೂ.300/-ರಂತೆ 10 ಅಧಿಕಾರಿಗಳಿಗೆ ಒಟ್ಟು ರೂ.3000/- ಶುಲ್ಕವನ್ನು ಪಾವತಿಸಲು ಹಾಗೂ ಈ ವೆಚ್ಚವನ್ನು 2702-02-001-0-01-ತರಬೇತಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಉಳಿದಿರುವ ರೂ.3.00 ಲಕ್ಷ ಅನುದಾನದಲ್ಲಿ ಭರಿಸಲಾಗುವುದೆಂದು ತಿಳಿಸುತ್ತಾ ಇಲಾಖೆಯ ಅಧಿಕಾರಿಗಳು ಈಗಾಗಲೇ ಸದರಿ ಕಾರ್ಯಾಗಾರದಲ್ಲಿ ಭಾಗವಹಿಸಿದ್ದರಿಂದ ಕ್ರಮ ತೆಗೆದುಕೊಂಡಿದ್ದಕ್ಕೆ ಅನುಮೋದನೆ ನೀಡಲು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನೀಇ 02 ಅಜಅ 2004, ಬೆಂಗಳೂರು, ದಿನಾಂಕ:01ನೇ ಏಪ್ರಿಲ್, 2004**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಜಲಸಂಪನ್ಮೂಲ ಯೋಜನೆ ಮತ್ತು ನಿರ್ವಹಣೆಯ ಬಗ್ಗೆ ದಾವಣಗೆರೆಯ ಬಾಪೂಜಿ ಇನ್ಸ್‌ಟಿಟ್ಯೂಟ್ ಆಫ್ ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿ ಇವರು ಏರ್ಪಡಿಸಿದ್ದ ಕಾರ್ಯಾಗಾರದಲ್ಲಿ ದಿನಾಂಕ:12.12.2003 ಮತ್ತು 13.12.2003 ರಂದು ಗಣಿ ಮತ್ತು ಭೂವಿಜ್ಞಾನ ಇಲಾಖೆಯ 10 ಅಧಿಕಾರಿಗಳು ಭಾಗವಹಿಸಲು ಪ್ರತಿ ಅಧಿಕಾರಿಗೆ ರೂ.300/-(ಮುನ್ನೂರು ರೂಪಾಯಿಗಳು) ಶುಲ್ಕದಂತೆ ಒಟ್ಟು ರೂ.3000/-ಗಳ (ಮೂರು ಸಾವಿರ ರೂಪಾಯಿಗಳು) ಶುಲ್ಕ ಭರಿಸಲು ಸರ್ಕಾರವು ಘಟನೋತ್ತರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್. ಮಂಜುನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್.418

## ಶಿಕ್ಷಣ ಸಚಿವಾಲಯ

**ವಿಷಯ:** ಕುವೆಂಪು ವಿಶ್ವವಿದ್ಯಾಲಯದ ತಾತ್ಕಾಲಿಕ ಉಪನ್ಯಾಸಕರುಗಳ ಸೇವಾಸಕ್ರಮತೆ ಸ್ಥಿರೀಕರಣದ ಬಗ್ಗೆ - ಆದೇಶ.

**ಓದಲಾಗಿದೆ:**
1. ದಿನಾಂಕ: 09-02-2001 ಸಂಖ್ಯೆ: ಇ ಡಿ 86 ಯುಎಸ್‌ವಿ 2000ದ ಸರ್ಕಾರಿ ಆದೇಶ.
2. ದಿನಾಂಕ:07-07-2001ಸಂ:ಕೆಯು/ಇ ಟಿ-01-81(06)/2001 903ರ ಕುವೆಂಪು ವಿಶ್ವವಿದ್ಯಾಲಯದ ಪತ್ರ.
3. ದಿನಾಂಕ: 24-01-2002 ಸಂ. ಇ ಡಿ 86 ಯುಎಸ್‌ವಿ 2000ದ ಸರ್ಕಾರಿ ಪತ್ರ.
4. ದಿನಾಂಕ:28-02-2002 ಸಂಖ್ಯೆ:ಕುವಿ/ಸಿಬ್ಬಂದಿ-1/81(ಅ)/2002/8305ರ ಕುವೆಂಪು ವಿಶ್ವವಿದ್ಯಾಲಯದ ಷೋಕಾಸ್ ನೋಟಿಸ್.
5. ರಿಟ್ ಅರ್ಜಿ ಸಂಖ್ಯೆ: 16511-16516/2002ರಲ್ಲಿನ ದಿನಾಂಕ: 10-04-2002 ಮತ್ತು ತದನಂತರದ ಮಧ್ಯಂತರ ಆದೇಶಗಳು.
6. ದಿನಾಂಕ: 11-12-2003ರ ಕುವೆಂಪು ವಿಶ್ವವಿದ್ಯಾಲಯದ ಉಪನ್ಯಾಸಕರಗಳ ಮನವಿ ಪತ್ರ.

**ಪ್ರಸ್ತಾವನೆ:**

1) ದಿನಾಂಕ: 27-04-2000ದ ರಾಜ್ಯಪಾಲರ ಅಧೀನ ಕಾರ್ಯದರ್ಶಿಯವರ ಪತ್ರದಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸಿಂಡಿಕೇಟು ದಿನಾಂಕ: 18-08-1994ರ ಸಭೆಯ ನಿರ್ಣಯದನ್ವಯ ಎರಡು ವರ್ಷಗಳ ಸೇವೆ ಪೂರೈಸಿರುವ ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಯಾವುದೇ ಅನುಶಾಸನ ರಚಿಸದೆ ಕ್ರಮಬದ್ಧಗೊಳಿಸಿದ್ದು, ಕೆಎಸ್‌ಯು ಅಧಿನಿಯಮ 1976 8(8)ನೇ ಪ್ರಕರಣದಡಿ ಅಗತ್ಯ ಕ್ರಮ ಕೈಗೊಳ್ಳಬೇಕೆಂದು ತಿಳಿಸಲಾಗಿತ್ತು. ಈ ವಿಷಯದಲ್ಲಿ ಕುವೆಂಪು ವಿಶ್ವವಿದ್ಯಾಲಯದಿಂದ ವಿವರವಾದ ವರದಿಯನ್ನು ಪಡೆಯಲಾಯಿತು. ಬೆಂಗಳೂರು ವಿಶ್ವವಿದ್ಯಾಲಯದ ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಕ್ರಮಬದ್ಧಗೊಳಿಸಿರುವ ಪೂರ್ವ ನಿದರ್ಶನವನ್ನು ಅನ್ವಯಿಸಿ ತಮ್ಮ ಸೇವೆಯನ್ನು ಸಹ ಕ್ರಮಬದ್ಧಗೊಳಿಸಬೇಕೆಂದು ಏಳು ಜನ ತಾತ್ಕಾಲಿಕ ಉಪನ್ಯಾಸಕರು ಮಾಡಿದ್ದ ಮನವಿಯನ್ನು ದಿನಾಂಕ: 18-08-1994ರ ಸಿಂಡಿಕೇಟಿನ ಮುಂದೆ ಮಂಡಿಸಲಾಗಿತ್ತು; ಸಿಂಡಿಕೇಟು ಈ ಕೆಳಕಂಡ ಏಳು ಜನ ತಾತ್ಕಾಲಿಕ ಉಪನ್ಯಾಸಕರುಗಳ ಸೇವೆಯನ್ನು ಕ್ರಮಬದ್ಧಗೊಳಿಸಲು ನಿರ್ಣಯಿಸಿತ್ತು.

| ಕ್ರ.ಸಂ | ಹೆಸರು | ವಿಷಯ |
|---|---|---|
| 1. | ಡಾ: ಕೇಶವ ಶರ್ಮ | ಕನ್ನಡ |
| 2. | ಡಾ: ಬಿ. ಜಯರಾಮ್ ಭಟ್ | ಅರ್ಥಶಾಸ್ತ್ರ |
| 3. | ಡಾ: ಶಿವಸ್ವಾಮಿ | ಇ ತಿಹಾಸ ಮತ್ತು ಪುರಾತತ್ವಶಾಸ್ತ್ರ |
| 4. | ಶ್ರೀಮತಿ ಜಿ. ಸರ್ವಮಂಗಳ | ಇ ತಿಹಾಸ ಮತ್ತು ಪುರಾತತ್ವಶಾಸ್ತ್ರ |
| 5. | ಶ್ರೀಮತಿ ಟಿ. ಪ್ರೇಮಲೀಲ | ಅರ್ಥಶಾಸ್ತ್ರ |
| 6. | ಶ್ರೀಮತಿ ಅನಿತಾ ಹೆಚ್.ಎಸ್ | ವಾಣಿಜ್ಯಶಾಸ್ತ್ರ |
| 7. | ಶ್ರೀ ಎಸ್.ಎನ್ ಯೋಗೀಶ್ | ಅರ್ಥಶಾಸ್ತ್ರ |

2) ಈ ವಿಷಯವನ್ನು ಯುಜಿಸಿ ಪರಿನಿಯಮಾವಳಿಗಳು ಹಾಗೂ ಅನುಶಾಸನದ ಉಪಬಂಧಗಳು ಮತ್ತು ಕೆ.ಎಸ್.ಯು ಅಧಿನಿಯಮ 1976ರ ಉಲ್ಲಂಘನೆಯ ಆರೋಪಗಳ ಬೆಳಕಿನಲ್ಲಿ ಪರಿಶೀಲಿಸಲಾಯಿತು. ಕುವೆಂಪು ವಿಶ್ವವಿದ್ಯಾಲಯದಲ್ಲಿ ಏಳು ಜನ ತಾತ್ಕಾಲಿಕ ನೌಕರರ ಕ್ರಮಬದ್ಧತೆಯಲ್ಲಿ ಇ ತರ ಅಂಶಗಳ ಜೊತೆಗೆ ಈ ಕೆಳಕಂಡ ದೋಷಗಳನ್ನು ಗಮನಿಸಲಾಗಿತ್ತು:

(1) ತಾತ್ಕಾಲಿಕ ನೌಕರರ ಸೇವೆಯನ್ನು ಸಕ್ರಮಗೊಳಿಸಲು ಚಾಲ್ತಿಯಲ್ಲಿರುವ ಕಾನೂನಿನಲ್ಲಿ ಅವಕಾಶವಿಲ್ಲದಿರುವುದರಿಂದ ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಕ್ರಮಬದ್ಧಗೊಳಿಸುವುದು ಕಾನೂನು ರೀತ್ಯ ಸಾಧ್ಯವಿರುವುದಿಲ್ಲ.

(2) ಉಪನ್ಯಾಸಕರುಗಳ ಹುದ್ದೆಗಳಿಗೆ 1976ರ ಕೆಎಸ್‌ಯು ಅಧಿನಿಯಮ 49ನೇ ಪ್ರಕರಣದಡಿ ರಚಿಸಲಾಗಿರುವ ನೇಮಕಾತಿ ಮಂಡಳಿಗಳ ಮೂಲಕ ಮಾತ್ರ ಪ್ರಕಟಿತ ಅರ್ಹತೆಯನ್ವಯ ನೇಮಕ ಮಾಡಬಹುದಾಗಿದೆ.

(3) ದಿನಾಂಕ:01-01-1986ರಿಂದ ಪರಿಷ್ಕೃತ ಯುಜಿಸಿ ವೇತನ ಶ್ರೇಣಿಯನ್ನು ವಿಸ್ತರಿಸಿರುವುದರಿಂದ ಯುಜಿಸಿ ಪರಿನಿಯಮಾವಳಿಗಳು, 1991ರ ಅನ್ವಯಿಕೆ ಕಡ್ಡಾಯವಾಗಿವೆ. ಯುಜಿಸಿ ಪರಿನಿಯಮಾವಳಿಗಳ ಕಡ್ಡಾಯ ಅನ್ವಯಿಕೆಯನ್ನು University of Delhi Vs Raja Singh reported in 1994 SUPP (3) SCC 516 ಪ್ರಕರಣದಲ್ಲಿ ಸರ್ವೋಚ್ಛ ನ್ಯಾಯಾಲಯವು ಎತ್ತಿ ಹಿಡಿದಿದೆ: ಆದ್ದರಿಂದ ವಿಶ್ವವಿದ್ಯಾಲಯ 49ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿರುವ ನೇರ ನೇಮಕಾತಿ ಹೊರತಾಗಿ ಬೇರೆ ಯಾವುದೇ ನೇಮಕಾತಿ ಪದ್ಧತಿಯನ್ನು ಅಳವಡಿಸಿಕೊಳ್ಳಲು ಸಾಧ್ಯವಿಲ್ಲ.

(4) ತಾತ್ಕಾಲಿಕ ಉಪನ್ಯಾಸಕರ ಸೇವೆ ಸಕ್ರಮಗೊಳಿಸಿರುವ ಕ್ರಮವು ಕರ್ನಾಟಕ ಎಸ್‌ಸಿ/ಎಸ್‌ಟಿ ಮತ್ತು ಒಬಿಸಿ (ನೇಮಕಾತಿಯಲ್ಲಿ ಮೀಸಲಾತಿ ಇ ತ್ಯಾದಿ) ಅಧಿನಿಯಮ, 1990 ಮತ್ತು 1992ರ ನಿಯಮಗಳು ಹಾಗೂ ರಾಜ್ಯ ಸರ್ಕಾರದ ಮೀಸಲಾತಿ ನೀತಿಯ ಉಲ್ಲಂಘನೆಯಾಗಿದೆ.

(5) ಉಚ್ಛ ನ್ಯಾಯಾಲಯ ಮತ್ತು ಸರ್ವೋಚ್ಛ ನ್ಯಾಯಾಲಯದ ತೀರ್ಪುಗಳು ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಸಕ್ರಮಗೊಳಿಸಲು ಪೂರಕವಾಗಿಲ್ಲ.

3) ಈ ಕಾರಣಗಳಿಂದ ದಿನಾಂಕ: 18-08-1994ರ ಸಿಂಡಿಕೇಟಿನ ನಿರ್ಣಯ ಹಾಗೂ ಸದರಿ ನಿರ್ಣಯದ ಆಧಾರದ ಮೇಲೆ ಏಳು ಜನ ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಸಕ್ರಮಗೊಳಿಸಿರುವ ಆದೇಶವನ್ನು ಏಕೆ ರದ್ದುಗೊಳಿಸಬಾರದು ಎಂದು ವಿವರಣೆ ನೀಡಲು ಕೇಳಿ ಕುವೆಂಪು ವಿಶ್ವವಿದ್ಯಾಲಯದ ಕುಲಸಚಿವರಿಗೆ ಷೋಕಾಸ್ ನೋಟೀಸ್ ನೀಡಲಾಗಿತ್ತು. ಕುವೆಂಪು ವಿಶ್ವವಿದ್ಯಾಲಯ ನೀಡಿದ ಉತ್ತರವನ್ನು ಪರಿಗಣಿಸಿ, ಅದು ತೃಪ್ತಿಕರವಾಗಿರಲಿಲ್ಲವಾದ್ದರಿಂದ ದಿನಾಂಕ: 09-02-2001 ಸಂಖ್ಯೆ: ಇ ಡಿ 86 ಯುಎಸ್‌ವಿ 2000ದ ಸರ್ಕಾರಿ ಆದೇಶದಲ್ಲಿ ದಿನಾಂಕ: 18-08-1994ರ ಸಿಂಡಿಕೇಟಿನ ನಿರ್ಣಯ ಹಾಗೂ ಸದರಿ ನಿರ್ಣಯ ಆಧಾರದ ಮೇಲೆ ಏಳು ಜನ ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಸಕ್ರಮಗೊಳಿಸಿರುವ ದಿನಾಂಕ: 18-08-1994ರ ಆದೇಶವನ್ನು ರದ್ದುಗೊಳಿಸಲಾಗಿತ್ತು. ಆದರೆ ಸಿಂಡಿಕೇಟಿನ ಶಿಫಾರಸ್ಸಿನಂತೆ ಕೆಲವು ಸರ್ವೋಚ್ಛ ನ್ಯಾಯಾಲಯದ ತೀರ್ಪುಗಳನ್ನು ಉಲ್ಲೇಖಿಸಿ ಮತ್ತು ಮಾನವೀಯ ಆಧಾರದ ಮೇಲೆ ಸಹ ಈ ಪ್ರಕರಣವನ್ನು ಪುನರ್ ಪರಿಗಣಿಸುವಂತೆ ಕೋರಿ ಕುವೆಂಪು ವಿಶ್ವವಿದ್ಯಾಲಯ ಸರ್ಕಾರಕ್ಕೆ ಪತ್ರ ಬರೆದಿತ್ತು. ಈ ಪ್ರಕರಣವನ್ನು ಕುವೆಂಪು ವಿಶ್ವವಿದ್ಯಾಲಯ ನೀಡಿದ್ದ ಸಮರ್ಥನೆಯ ಬೆಳಕಿನಲ್ಲಿ ಪರಿಗಣಿಸಿ ಅದು ಸಮರ್ಪಕವಾಗಿರಲಿಲ್ಲವಾದ್ದರಿಂದ ದಿನಾಂಕ: 09-02-2001ರ ಆದೇಶವನ್ನು ಜಾರಿಗೊಳಿಸುವಂತೆ ನಿರ್ದೇಶನ ನೀಡಲಾಗಿತ್ತು. ಅದನ್ನಾಧರಿಸಿ ಕುವೆಂಪು ವಿಶ್ವವಿದ್ಯಾಲಯ ಆರು ಜನ ಉಪನ್ಯಾಸಕರುಗಳಿಗೆ (ಶ್ರೀಮತಿ ಟಿ. ಪ್ರೇಮಲೀಲರವರು ಈಗಾಗಲೇ ರಾಜೀನಾಮೆ ನೀಡಿರುವುದರಿಂದ) ನೋಟೀಸ್ ಜಾರಿಗೊಳಿಸಿತ್ತು. ಡಾ: ಬಿ.ಜಯರಾಮ್ ಭಟ್ ಇ ತರ ಐವರು ನೇಮಕಾತಿ ರದ್ದುಗೊಳಿಸಲಾದ ಉಪನ್ಯಾಸಕರುಗಳು ರಿಟ್ ಅರ್ಜಿ ಸಂಖ್ಯೆ: 16511-16/ 2002ಗಳನ್ನು ಸಲ್ಲಿಸಿ ದಿನಾಂಕ: 09-12-2001ರ ಸರ್ಕಾರಿ ಆದೇಶ ಹಾಗೂ ವಿಶ್ವವಿದ್ಯಾಲಯ ನೀಡಿರುವ ನೋಟೀಸಿಗೆ ತಡೆಯಾಜ್ಞೆ ಪಡೆದಿದ್ದಾರೆ. ಈ ರಿಟ್ ಅರ್ಜಿಗಳು ಇ ನ್ನೂ ಅಂತಿಮವಾಗಿ ತೀರ್ಮಾನವಾಗಬೇಕಾಗಿದೆ.

4) ಈ ಮಧ್ಯೆ, ಸೇವಾ ಸಕ್ರಮತೆಯನ್ನು ರದ್ದುಗೊಳಿಸಲಾಗಿರುವ ಆರು ಜನ ಕುವೆಂಪು ವಿಶ್ವವಿದ್ಯಾಲಯದ ಉಪನ್ಯಾಸಕರು ಮನವಿ ಸಲ್ಲಿಸಿ ತಮ್ಮ ಪ್ರಕರಣವು ಬೆಂಗಳೂರು ವಿಶ್ವವಿದ್ಯಾಲಯದ ತಾತ್ಕಾಲಿಕ ನೌಕರರ ಪ್ರಕರಣಕ್ಕೆ ಸಾಮ್ಯತೆ ಹೊಂದಿರುವುದರಿಂದ ಸದರಿ ಪೂರ್ವ ನಿದರ್ಶನವನ್ನು ಅನ್ವಯಿಸಿ ತಮ್ಮ ಸೇವಾ ಸಕ್ರಮತೆಯನ್ನು ರದ್ದುಗೊಳಿಸಿರುವ ಆದೇಶವನ್ನು ಹಿಂತೆಗೆದುಕೊಳ್ಳುವಂತೆ ಕೋರಿದ್ದಾರೆ.

5) ಈ ಪ್ರಕರಣಗಳ ವಿಶ್ಲೇಷಣೆಯಿಂದ ವ್ಯಕ್ತವಾಗುವಂತೆ ಕುವೆಂಪು ವಿಶ್ವವಿದ್ಯಾಲಯ ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಸಕ್ರಮಗೊಳಿಸುವ ಸಂದರ್ಭದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಸಕ್ರಮಗೊಳಿಸಿರುವ ಪೂರ್ವನಿದರ್ಶನವನ್ನು ಅನ್ವಯಿಸಿತ್ತು. ಕುವೆಂಪು ವಿಶ್ವವಿದ್ಯಾಲಯದ ತಾತ್ಕಾಲಿಕ ಉಪನ್ಯಾಸಕರ ಸೇವಾ ಕ್ರಮಬದ್ಧತೆಯನ್ನು ರದ್ದುಗೊಳಿಸುವ ಸಂದರ್ಭದಲ್ಲಿಯು ಸಹ ಬೆಂಗಳೂರು ವಿಶ್ವವಿದ್ಯಾಲಯದ ಪ್ರಕರಣವನ್ನು ಪೂರ್ವ ನಿದರ್ಶನವನ್ನಾಗಿಟ್ಟುಕೊಳ್ಳಲಾಗಿದೆ. ಆದ್ದರಿಂದ ಬೆಂಗಳೂರು ವಿಶ್ವವಿದ್ಯಾಲಯ ಮತ್ತು ಕುವೆಂಪು ವಿಶ್ವವಿದ್ಯಾಲಯದ ತಾತ್ಕಾಲಿಕ ಉಪನ್ಯಾಸಕರ ಸೇವಾ ಕ್ರಮಬದ್ಧತೆಯ ಪ್ರಕರಣಗಳು ಸಾಮ್ಯತೆಯನ್ನು ಹೊಂದಿವೆ. ಇ ತ್ತೀಚೆಗೆ ರಾಜ್ಯ ಸರ್ಕಾರವು ಬೆಂಗಳೂರು ವಿಶ್ವವಿದ್ಯಾಲಯದ 22 ಮತ್ತು 4 ತಾತ್ಕಾಲಿಕ ಉಪನ್ಯಾಸಕರುಗಳ ಸೇವಾ ಕ್ರಮಬದ್ಧತೆಯ ವಿಷಯವನ್ನು ಹಲವಾರು ಹೊಸ ಅಂಶಗಳು ಹಾಗೂ ನ್ಯಾಯಾಲಯದ ತೀರ್ಪುಗಳ ಹಿನ್ನೆಲೆಯಲ್ಲಿ ಪುನರ್ ಪರಿಗಣಿಸಿದ್ದು, 22 ಮತ್ತು 4 ತಾತ್ಕಾಲಿಕ ಉಪನ್ಯಾಸಕರುಗಳ ಸೇವಾ ಕ್ರಮಬದ್ಧತೆಯನ್ನು ರದ್ದುಗೊಳಿಸಿದ್ದ ಸರ್ಕಾರಿ ಆದೇಶಗಳನ್ನು ದಿನಾಂಕ: 03-12-2003 ಸಂಖ್ಯೆ: ಇ ಡಿ 08 ಯುಬಿವಿ 2000ದ ಸರ್ಕಾರಿ ಆದೇಶದಲ್ಲಿ ಹಿಂತೆಗೆದುಕೊಂಡಿದೆ. ಈ ಕೆಳಕಂಡ ಅಂಶಗಳು ಹಾಗೂ ನ್ಯಾಯಾಲಯದ ತೀರ್ಪುಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಕರಣವನ್ನು ಪುನರ್ ಪರಿಗಣಿಸಲು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ :

(1) ತಾತ್ಕಾಲಿಕ ಉಪನ್ಯಾಸಕರುಗಳ ಸೇವೆಯನ್ನು ಸಕ್ರಮಗೊಳಿಸುವ ನಿರ್ಣಯವನ್ನು ಅಂತರ ವಿಶ್ವವಿದ್ಯಾಲಯ ಮಂಡಳಿಯಲ್ಲಿ ತೆಗೆದುಕೊಳ್ಳಲಾಗಿದೆ; ಆ ನಿರ್ಣಯವನ್ನಾಧರಿಸಿ ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಗಳಿಂದ ಅಗತ್ಯ ಮಾಹಿತಿ/ವಿವರಗಳನ್ನು ಕರೆದು ಈ ವಿಷಯವನ್ನು ಸಮನ್ವಯಿಸುತ್ತಿತ್ತು. ರಾಜ್ಯ ಸರ್ಕಾರವು ತಾತ್ಕಾಲಿಕ ಉಪನ್ಯಾಸಕರ ಸೇವಾ ಸಕ್ರಮತೆ ವಿಷಯ ತೀರ್ಮಾನವಾಗುವವರೆಗೆ ಹೊಸದಾಗಿ ತಾತ್ಕಾಲಿಕ ಉಪನ್ಯಾಸಕರ ನೇಮಕಾತಿ ಮಾಡಬಾರದೆಂದು ನಿಷೇಧವನ್ನು ಸಹ ವಿಧಿಸಿತ್ತು.

(2) ಈ ಹಿಂದೆ ರಾಜ್ಯ ಸರ್ಕಾರವು ಶಾಲೆಗಳು/ಪದವಿ ಪೂರ್ವ ಕಾಲೇಜುಗಳು/ಪದವಿ ಕಾಲೇಜುಗಳು ಹಾಗೂ ಇ ಂಜಿನಿಯರಿಂಗ್ ಕಾಲೇಜುಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ಗುತ್ತಿಗೆ ಆಧಾರದ ಶಿಕ್ಷಕರ ಸೇವೆಯನ್ನು ಸಕ್ರಮಗೊಳಿಸಿದೆ. ರಾಜ್ಯ ಸರ್ಕಾರವು ಅನುದಾನಿತ ಕಾಲೇಜುಗಳಲ್ಲಿನ ಸ್ಟಾಫ್‌ಗ್ಯಾಪ್ ಉಪನ್ಯಾಸಕರುಗಳ ಹಾಗೂ ಇ ತ್ತೀಚೆಗೆ ಪದವಿ ಕಾಲೇಜುಗಳಲ್ಲಿನ ಅರೆ ಕಾಲಿಕ ಉಪನ್ಯಾಸಕರುಗಳ ಸೇವೆಯನ್ನು ಸಹ ಸಕ್ರಮಗೊಳಿಸಿದೆ.

(3) ಈ ಉಪನ್ಯಾಸಕರುಗಳು 1985-88ನೇ ಸಾಲಿನಲ್ಲಿ ನೇಮಕ ಹೊಂದಿದ್ದು, ಸೇವಾ ಸಕ್ರಮತೆಗೊಂಡ ದಿನಾಂಕದಂದು 6-9 ವರ್ಷಗಳ ಸೇವೆ ಸಲ್ಲಿಸಿದ್ದರು ಮತ್ತು ಸಕ್ರಮಗೊಂಡ ನಂತರ ಮತ್ತೆ 9 ವರ್ಷಗಳ ಸೇವೆ ಪೂರ್ಣಗೊಳಿಸಿದ್ದಾರೆ. ಕಾಲೇಜು ಶಿಕ್ಷಣ ನಿರ್ದೇಶಕರ ಅಧ್ಯಕ್ಷತೆಯಲ್ಲಿ ನೇಮಿಸಲಾಗಿದ್ದ ಸಿಂಡಿಕೇಟ್ ಉಪಸಮಿತಿ ಇ ವರುಗಳ ಸೇವಾ ಸಕ್ರಮತೆಗೆ ಶಿಫಾರಸ್ಸು ಮಾಡಿತ್ತು. ಈ ಎಲ್ಲಾ ಉಪನ್ಯಾಸಕರುಗಳು ಯುಜಿಸಿ ಪರಿನಿಯಮಾವಳಿಗಳು 1991ರನ್ವಯ ಉಪನ್ಯಾಸಕರುಗಳಾಗಿ ನೇಮಕಾತಿ ಹೊಂದಲು ಅರ್ಹತೆ ಹೊಂದಿದ್ದರು. ನೇಮಕಾತಿ ಮಂಡಳಿಗಳು ಈ ಎಲ್ಲಾ ಪ್ರಕರಣಗಳನ್ನು ನೇಮಕಾತಿಗಾಗಿ ಶಿಫಾರಸ್ಸು ಮಾಡಿದ್ದವು.

(4) ಈ ಉಪನ್ಯಾಸಕರುಗಳ ಸೇವೆಯನ್ನು ಸಕ್ರಮಗೊಳಿಸಿದ್ದರಿಂದ ಅವರುಗಳು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಮತ್ತು ಇ ತರ ಕಡೆ ಬೇರೆ ನೇಮಕಾತಿಗಾಗಿ ಪ್ರಯತ್ನ ನಡೆಸಿರುವುದಿಲ್ಲ. ಇ ದರಿಂದಾಗಿ ಬೇರೆ ನೇಮಕಾತಿಯ ಅವಕಾಶಗಳನ್ನು ಕಳೆದುಕೊಂಡಿದ್ದಾರೆ.

(5) ಈ ಎಲ್ಲಾ ಉಪನ್ಯಾಸಕರುಗಳು 40-50ರ ವಯಸ್ಸಿನಲ್ಲಿದ್ದು, ನೇಮಕಾತಿಗೆ ನಿರ್ದಿಷ್ಟಪಡಿಸಿರುವ ಗರಿಷ್ಟ ವಯೋಮಿತಿಯನ್ನು ಮೀರಿದ್ದಾರೆ.

(6) ಅವರ ನೇಮಕಾತಿ ಸಕ್ರಮತೆಯ ವಿಧಿ-ವಿಧಾನದಲ್ಲಿ ಕೆಲವು ದೋಷಗಳಿದ್ದಲ್ಲೂ ಅದಕ್ಕಾಗಿ ಉಪನ್ಯಾಸಕರುಗಳನ್ನು ಹೊಣೆಗಾರರನ್ನಾಗಿ ಮಾಡಲು ಸಾಧ್ಯವಿಲ್ಲ. ಬೆಂಗಳೂರು ವಿಶ್ವವಿದ್ಯಾಲಯ ಈ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕಾಗುತ್ತದೆ.

(7) ವಿಧಾನ ಮಂಡಲದ ಅಧೀನ ಶಾಸನ ಸಮಿತಿಯು ಈ ಪ್ರಕರಣವನ್ನು ಚರ್ಚಿಸಿದ್ದು, ಸೇವಾ ಸಕ್ರಮತೆಯ ಸಿಂಧುತ್ವವನ್ನು ನಿರ್ಣಯಿಸುವಲ್ಲಿ ಉಂಟಾಗಿರುವ ವಿಳಂಬದ ಕಾರಣದ ಮೇಲೆ ಈ ಪ್ರಕರಣಗಳನ್ನು ಪುನರ್ ಪರಿಗಣಿಸುವಂತೆ ಶಿಫಾರಸ್ಸು ಮಾಡಿದೆ.

(8) ಸರ್ವೋಚ್ಛ ನ್ಯಾಯಾಲಯವು ಸಿವಿಲ್ ಅಪೀಲ್ ಸಂಖ್ಯೆ: 2277-88/94ರಲ್ಲಿ ದಿನಾಂಕ: 04-04-1994ರ ತೀರ್ಪಿನಲ್ಲಿ ಕರ್ನಾಟಕ ರಾಜ್ಯ ಖಾಸಗಿ ಕಾಲೇಜುಗಳ ಸ್ಟಾಫ್‌ಗ್ಯಾಪ್ ಉಪನ್ಯಾಸಕರುಗಳ ಸಂಘದ ಪ್ರಕರಣದಲ್ಲಿ ನೀಡಿರುವ ತೀರ್ಪನ್ನಾಧರಿಸಿ ವಿಶ್ವವಿದ್ಯಾಲಯಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಡಾಕ್ ಶಿಕ್ಷಕರುಗಳು ಸಹ ಅಂತಹದೇ ಸೌಲಭ್ಯಗಳಿಗೆ ಅರ್ಹರೆಂದು, ಆದ್ದರಿಂದ ಹುದ್ದೆಗಳು ಲಭ್ಯವಾದಾಗ ಅವರುಗಳ ಸೇವೆಯನ್ನು ಸಕ್ರಮಗೊಳಿಸಬೇಕೆಂದು ಮೀಸಲಾತಿ ಕಾರಣದಿಂದ ಹುದ್ದೆಗಳ ಕೊರತೆಯಿದ್ದಲ್ಲಿ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಿ ಅಂತಹ ಉಪನ್ಯಾಸಕರುಗಳನ್ನು ಸಕ್ರಮಗೊಳಿಸಬೇಕೆಂದು ವಿಶ್ವವಿದ್ಯಾಲಯಗಳಿಗೆ ನಿರ್ದೇಶನ ನೀಡಿದೆ. ಸರ್ವೋಚ್ಛ ನ್ಯಾಯಾಲಯದ ಈ ತೀರ್ಪನ್ನಾಧರಿಸಿ ಕರ್ನಾಟಕ ಉಚ್ಛನ್ಯಾಯಾಲಯ ಸಹ ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಸಕ್ರಮಗೊಳಿಸಲು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ನಿರ್ದೇಶನ ನೀಡಿದೆ. ನ್ಯಾಯ ಸಮ್ಮತವಾದ ಪರಿಹಾರವನ್ನು ಸಮಾನ ಸಂದರ್ಭದಲ್ಲಿರುವ ಎಲ್ಲರಿಗೂ ವಿಸ್ತರಿಸಬೇಕೆಂಬುದು ತೀರ್ಮಾನವಾಗಿರುವ ಕಾನೂನಿನ ಸಿದ್ಧಾಂತವಾಗಿದೆ.

6) ಮೇಲ್ಕಂಡ ಎಲ್ಲಾ ಅಂಶಗಳು ಕುವೆಂಪು ವಿಶ್ವವಿದ್ಯಾಲಯದ ತಾತ್ಕಾಲಿಕ ಉಪನ್ಯಾಸಕರುಗಳ ಪ್ರಕರಣಕ್ಕೆ ಯಥಾವತ್ತಾಗಿ ಅನ್ವಯವಾಗುತ್ತವೆ. ಅದಲ್ಲದೆ ಆರು ಉಪನ್ಯಾಸಕರ ಪೈಕಿ, ಐದು ಜನ ಪಿ.ಹೆಚ್‌ಡಿ ಹೊಂದಿದ್ದು ಡಾ:ಶಿವಸ್ವಾಮಿ ಮತ್ತು ಡಾ: ಹೆಚ್.ಎಸ್. ಅನಿತಾರವರು 1990ರಲ್ಲಿಯೇ ಎನ್‌ಇ ಟಿಯಲ್ಲಿ ತೇರ್ಗಡೆ ಹೊಂದಿದ್ದಾರೆ. ಕುವೆಂಪು ವಿಶ್ವವಿದ್ಯಾಲಯದ ತಾತ್ಕಾಲಿಕ ಉಪನ್ಯಾಸಕರ ಪ್ರಕರಣವು ಬೆಂಗಳೂರು ವಿಶ್ವವಿದ್ಯಾಲಯದ ತಾತ್ಕಾಲಿಕ ಉಪನ್ಯಾಸಕರ ಪ್ರಕರಣದಂತೆಯೇ ಇದ್ದು, ಬೆಂಗಳೂರು ವಿಶ್ವವಿದ್ಯಾಲಯದ ಉಪನ್ಯಾಸಕರಿಗೆ ವಿಸ್ತರಿಸಿರುವ ಸೌಲಭ್ಯವನ್ನು ಇ ವರಿಗೂ ವಿಸ್ತರಿಸಬೇಕಾಗುತ್ತದೆ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಕರಣವನ್ನು ಪೂರ್ವ ನಿದರ್ಶವನ್ನಾಗಿಟ್ಟುಕೊಂಡು ಕುವೆಂಪು ವಿಶ್ವವಿದ್ಯಾಲಯದ ಆರು ತಾತ್ಕಾಲಿಕ ಉಪನ್ಯಾಸಕರ (ತದನಂತರದಲ್ಲಿ ರಾಜೀನಾಮೆ ಸಲ್ಲಿಸಿರುವುದರಿಂದ ಡಾ: ಟಿ. ಪ್ರೇಮಲೀಲಾರವರ ಪ್ರಕರಣವನ್ನು ಹೊರತುಪಡಿಸಿ) ಸೇವಾ ಸಕ್ರಮತೆಯನ್ನು ರದ್ದುಗೊಳಿಸಿರುವ ದಿನಾಂಕ: 09-02-2001 ಸಂಖ್ಯೆ: ಇ ಡಿ 86 ಯುಎಸ್‌ವಿ 2000ದ ಸರ್ಕಾರಿ ಆದೇಶವನ್ನು ಹಿಂತೆಗೆದುಕೊಳ್ಳುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ :

**ಸರ್ಕಾರಿ ಆದೇಶ ಸಂಖ್ಯೆ: ಇ ಡಿ 06 ಯುಎಸ್‌ವಿ 2004 ಬೆಂಗಳೂರು, ದಿನಾಂಕ: 6ನೇ ಏಪ್ರಿಲ್, 2004**

7) ಪೀಠಿಕೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ, ಕರ್ನಾಟಕ ಸರ್ಕಾರವು ಕುವೆಂಪು ವಿಶ್ವವಿದ್ಯಾಲಯದ ಆರು ತಾತ್ಕಾಲಿಕ ಉಪನ್ಯಾಸಕರ (ತದನಂತರದಲ್ಲಿ ರಾಜೀನಾಮೆ ಸಲ್ಲಿಸಿರುವುದರಿಂದ ಡಾ: ಟಿ. ಪ್ರೇಮಲೀಲಾರವರ ಪ್ರಕರಣವನ್ನು ಹೊರತುಪಡಿಸಿ) ಸೇವಾ ಸಕ್ರಮತೆಯನ್ನು ರದ್ದುಗೊಳಿಸಿರುವ ದಿನಾಂಕ: 09-02-2001 ಸಂಖ್ಯೆ: ಇ ಡಿ 86 ಯುಎಸ್‌ವಿ 2000ದ ಸರ್ಕಾರಿ ಆದೇಶವನ್ನು ಹಿಂತೆಗೆದುಕೊಂಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಂದರ ರಾಜ ಗುಪ್ತ**

ಪಿ.ಆರ್.424 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇ ಲಾಖೆ (ವಿಶ್ವವಿದ್ಯಾಲಯ).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಮಾಹಿತಿ ತಂತ್ರಜ್ಞಾನ ಇಲಾಖೆಯನ್ನು ದಿನಾಂಕಃ 9.2.2004 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 28 ಸಸಿವಿ 97 ದಿನಾಂಕಃ 9.2.1998.
2. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 06 ಸಸಿವಿ 98, ದಿನಾಂಕಃ 15.3.1999.
3. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 04 ಸಸಿವಿ 98, ದಿನಾಂಕಃ 24.6.1999.
4. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 52 ಸಸಿವಿ 99, ದಿನಾಂಕಃ 3.12.1999.
5. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 25 ಸಸಿವಿ 2000, ದಿನಾಂಕಃ 27.7.2000.
6. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 32 ಸಸಿವಿ 2000, ದಿನಾಂಕಃ 4.9.2000.
7. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 25 ಸಸಿವಿ 2000, ದಿನಾಂಕಃ 1.3.2001.
8. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 41 ಸಸಿವಿ 2001, ದಿನಾಂಕಃ 18.9.2001.
9. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 13 ಸಸಿವಿ 2002, ದಿನಾಂಕಃ 1.3.2002.
10. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 27 ಸಸಿವಿ 2003, ದಿನಾಂಕ: 2.5.2003.
11. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಸಸಿವಿ 2003, ದಿನಾಂಕ: 3.12.2003.
12. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 87 ಸಸಿವಿ 2003, ದಿನಾಂಕ: 1.1.2004.
13. ಅಧೀನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆಃಮಾತಂಇ, 05 ಇಸಂಸೇ 2004, ದಿನಾಂಕಃ 6.2.2004 ಮತ್ತು 1.3.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಭಾರತೀಯ ಆಡಳಿತ ಸೇವೆಯ ಸೂಪರ್ ಟೈಂ ವೇತನ ಶ್ರೇಣಿಯ ಸರ್ಕಾರದ ಕಾರ್ಯದರ್ಶಿ (ಮಾಹಿತಿ ತಂತ್ರಜ್ಞಾನ) ಹುದ್ದೆಯನ್ನು ಕೆಳಕಂಡ ಪೂರಕ ಸಿಬ್ಬಂದಿಯೊಡನೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| | | |
|---|---|---|
| 1. | ಹಿರಿಯ ಸಹಾಯಕರು: ಶೀಘ್ರಲಿಪಿಗಾರರು | 2 |
| 2. | ಭಾಷಾಂತರಕಾರರು | 1 |
| 3. | ಕಿರಿಯ ಸಹಾಯಕರು | 1 |
| 4. | ದಲಾಯತ್ | 2 |

ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳನ್ನು ದಿನಾಂಕಃ 9.2.1999 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕಾರ್ಯದರ್ಶಿ (ಮಾಹಿತಿ ತಂತ್ರಜ್ಞಾನ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಆಪ್ತ ಶಾಖೆಗೆ ಒಂದು ಚಾಲಕರ ಹುದ್ದೆಯನ್ನು ಮೇಲ್ಕಂಡ ಹುದ್ದೆಗಳ ಅವಧಿಯ ಚಾಲ್ತಿಯವರೆಗೆ ಸೃಜಿಸಲಾಗಿದೆ.

ಕ್ರಮ ಸಂಖ್ಯೆ (4) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ, ಮೇಲ್ಕಂಡ ಹುದ್ದೆಗಳೊಡನೆ ಕೆಳಕಂಡ ಅಧಿಕ ಹುದ್ದೆಗಳನ್ನು ಒಳಗೊಂಡಂತೆ ^ಮಾಹಿತಿ ತಂತ್ರಜ್ಞಾನ ಇಲಾಖೆ^ ಎಂಬ ಪ್ರತ್ಯೇಕ ಇಲಾಖೆಯನ್ನು ಸೃಜಿಸಲಾಗಿದೆ.

| | | |
|---|---|---|
| 1. | ಉಪ ಕಾರ್ಯದರ್ಶಿ:ಜಂಟಿ ಕಾರ್ಯದರ್ಶಿ:ಅಪರ ಕಾರ್ಯದರ್ಶಿ | 1 |
| 2. | ಅಧೀನ ಕಾರ್ಯದರ್ಶಿ : ಶಾಖಾಧಿಕಾರಿ | 1 |
| 3. | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 |
| 4. | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ ಹುದ್ದೆ) | 1 |
| 5. | ತಾಂತ್ರಿಕ ಸಹಾಯಕರು : ಪ್ರೋಗ್ರಾಮರ್ (ವೇತನ ಶ್ರೇಣಿ ರಹಿತ ಹುದ್ದೆ) | 5 |
| 6. | ಶೀಘ್ರಲಿಪಿಗಾರರು | 2 |
| 7. | ದಲಾಯತ್ | 2 |
| 8. | ಚಾಲಕ | 1 |

ಮೇಲ್ಕಂಡ ಹುದ್ದೆಗಳನ್ನು ಕ್ರಮ ಸಂಖ್ಯೆ (5)ರ ಆದೇಶದಲ್ಲಿ ದಿನಾಂಕ: 8.2.2001 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಇಲಾಖೆಯಲ್ಲಿ ದಿನಾಂಕ: 8.2.2001 ರವರೆಗೆ ಒಂದು ಯೋಜನಾ ಸಮನ್ವಯಕರು, (ವೇತನ ಶ್ರೇಣಿ ರಹಿತ) (ಇ-ಗವರ್ನೆನ್ಸ್) ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 9.2.2001 ರಿಂದ ದಿನಾಂಕ: 8.2.2002 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (8) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳಲ್ಲಿ ಉಪ ಕಾರ್ಯದರ್ಶಿ, ಶೀಘ್ರಲಿಪಿಗಾರರು ಹಾಗೂ ದಲಾಯತ್ (ತಲಾ ಒಂದೊಂದು ಹುದ್ದೆ) ಹುದ್ದೆಗಳನ್ನು ದಿನಾಂಕ: 31.8.2001 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸಲಾಗಿದೆ.

ಕ್ರಮ ಸಂಖ್ಯೆ (10) ರಲ್ಲಿ ಓದಲಾದ ದಿನಾಂಕ: 2.5.2003ರ ಸರ್ಕಾರದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ಇಲಾಖೆಯ ಹುದ್ದೆಗಳನ್ನು ದಿನಾಂಕ: 9.2.2003 ರಿಂದ 8.2.2004 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ. ಕ್ರಮ ಸಂಖ್ಯೆ (11) ರಲ್ಲಿ ಓದಲಾಗಿರುವ ದಿನಾಂಕ: 3.12.2003ರ ಸರ್ಕಾರದ ಆದೇಶದಲ್ಲಿ ಇಲಾಖೆಯ ಸರ್ಕಾರದ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 20.10.2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಲಾಗಿರುತ್ತದೆ. ಕ್ರಮ ಸಂಖ್ಯೆ (12) ರಲ್ಲಿ ಓದಲಾದ ದಿನಾಂಕ: 1.1.2004ರ ಸರ್ಕಾರದ ಆದೇಶದಲ್ಲಿ ಇಲಾಖೆಯಲ್ಲಿ ಮತ್ತೊಂದು ವಿಶೇಷಾಧಿಕಾರಿ-II ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲು – ಈ ಇಲಾಖೆಗೆ ಈಗಾಗಲೇ ಮಂಜೂರಾಗಿರುವ 5 ತಾಂತ್ರಿಕ ಸಹಾಯಕ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಅಬೆಯನ್ಸ್‌ನಲ್ಲಿ ಇಡುವ ನಿಬಂಧನೆಯೊಂದಿಗೆ ಮುಂದುವರೆಸಲಾಗಿರುತ್ತದೆ.

ಪ್ರಸ್ತುತ ಕ್ರಮ ಸಂಖ್ಯೆ (13) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹುದ್ದೆಗಳನ್ನು ದಿನಾಂಕ: 9.2.2004 ರಿಂದ ಮತ್ತೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 2004, ಬೆಂಗಳೂರು, ದಿನಾಂಕ:24ನೇ ಮಾರ್ಚ್, 2004**

ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ ಮತ್ತುಜೈವಿಕ ತಂತ್ರಜ್ಞಾನ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:9.2.2004 ರಿಂದ ಜಾರಿಗೆ ಬರುವಂತೆ 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | 2 | 3 |
| 1. | ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ | 1 |
| 2. | ಅಧೀನ ಕಾರ್ಯದರ್ಶಿ : ಶಾಖಾಧಿಕಾರಿ | 1 |
| 3. | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ ಹುದ್ದೆ) | 1 |
| 4. | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ ಹುದ್ದೆ) | 1 |
| 5. | ತಾಂತ್ರಿಕ ಸಹಾಯಕರು : ಪ್ರೋಗ್ರಾಮರ್ (ವೇತನ ಶ್ರೇಣಿ ರಹಿತ ಹುದ್ದೆ) | 4 |
| 6. | ಯೋಜನಾ ಸಮನ್ವಯಕರು (ವೇತನ ಶ್ರೇಣಿ ರಹಿತ ಹುದ್ದೆ) | 1 |
| 7. | ಹಿರಿಯ ಸಹಾಯಕರು : ಶೀಘ್ರಲಿಪಿಗಾರರು | 3 |
| 8. | ಭಾಷಾಂತರಕಾರರು | 1 |
| 9. | ಕಿರಿಯ ಸಹಾಯಕರು | 1 |
| 10. | ದಲಾಯತ್ | 3 |
| 11. | ಚಾಲಕರು | 2 |

ಸದರಿ ಸರ್ಕಾರದ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ.ಪ್ರಭು**

ಪಿ.ಆರ್.428 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಶ್ರೀ ವಿಶ್ವನಾಥ ರೆಡ್ಡಿ, ಪದವೀಧರ ಇಂಜಿನಿಯರ್, (ಎಂ.ಆರ್ಇ) ಇವರು ದಿನಾಂಕ 26.8.2002ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 23 ಪಿಡಬ್ಲ್ಯುಸಿ 2003 ಬೆಂಗಳೂರು ದಿನಾಂಕ:6ನೇ ಏಪ್ರಿಲ್, 2004**

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94 ದಿನಾಂಕ 29.9.94
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 357 ಪಿಡಬ್ಲ್ಯುಸಿ 90 ದಿನಾಂಕಃ 2.12.94.
3. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯುಡಿ 201 ಪಿಡಬ್ಲ್ಯುಸಿ 95 ದಿ: 2.7.94, 1.9.95 ಹಾಗೂ13.9.95
4. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ 55 ಪಿಡಬ್ಲ್ಯುಸಿ 98 ದಿನಾಂಕ 10.7.98.
5. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್ಃ144:ಇಎಸ್ಎಂ:ದಿನೌಸೇ:2002–2003:ದಿನಾಂಕಃ 1.3.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (5) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್ಎಲ್ಸಿ 94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 55 ಪಿಡಬ್ಲ್ಯುಸಿ 98 ದಿನಾಂಕ 10.7.98ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚೆ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 55 ಪಿಡಬ್ಲ್ಯುಸಿ 98 ದಿನಾಂಕ 10.7.98ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧ ಗೊಂಡ ದಿನಾಂಕ | ಕಾರ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ವಿಶ್ವನಾಥ ರೆಡ್ಡಿ ಪದವೀಧರ ಇಂಜಿನಿಯರ್ | 1.11.91<br>26.8.92 | 25.8.2002 | 26.8.2002 | ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ರಾಯಚೂರು. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್ಎಲ್ಸಿ:94 ದಿನಾಂಕ 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಚಂದ್ರಶೇಖರಪ್ಪ**

ಪಿ.ಆರ್.434

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ(ಸೇವೆಗಳು–ಸಿ)